

## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:- | 1726 |
| 2) | ಮಾನ್ಯ ಸದಸ್ಯರ ಹೆಸರು:- | ಶ್ರೀ ಬಿ.ಜಿ.ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3) | ಉತ್ತರಿಸಬೇಕಾದ ದಿನಾಂಕ:- | 22-03-2021. |
| 4) | ಉತ್ತರಿಸುವವರು:- | ಮಾನ್ಯ ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ, ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ.) | ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ನಡೆಸಲಾದ ಉದ್ಯೋಗ ಮೇಳಗಳು ಎಷ್ಟು; ಹಾಗೂ ಸೃಷ್ಟಿ ಮಾಡಲಾದ ಉದ್ಯೋಗಗಳ ಸಂಖ್ಯೆ ಎಷ್ಟು (ಸಂಪೂರ್ಣ ವಿವರ ನೀಡುವುದು) | **ಕೌಶಲ್ಯ ಮಿಷನ್:**<br>ಕಲಬುರಗಿ ಜಿಲ್ಲೆಯಲ್ಲಿ ಇಲ್ಲಿಯವರೆವಿಗೂ 2 ಉದ್ಯೋಗ ಮೇಳವನ್ನು ನಡೆಸಲಾಗಿದ್ದು, ಯಾದಗಿರಿ ಜಿಲ್ಲೆಯಲ್ಲಿ-1 ಉದ್ಯೋಗ ಮೇಳವನ್ನು ನಡೆಸಲಾಗಿದೆ. ಅದರಂತೆ ಕಲಬುರಗಿ ಜಿಲ್ಲೆಯಲ್ಲಿ 3490 ಅಭ್ಯರ್ಥಿಗಳಿಗೆ ಹಾಗೂ ಯಾದಗಿರಿ ಜಿಲ್ಲೆಯಲ್ಲಿ 1326 ಅಭ್ಯರ್ಥಿಗಳಿಗೆ ಉದ್ಯೋಗಾವಕಾಶ ಕಲ್ಪಿಸಲಾಗಿದೆ. |
| (ಆ) | ಮೇಲ್ಕಂಡ ಜಿಲ್ಲೆಗಳಲ್ಲಿ ಕೌಶಲ್ಯಾಭಿವೃದ್ಧಿಯಲ್ಲಿ ತರಬೇತಿ ಪಡೆದ ವಿದ್ಯಾರ್ಥಿಗಳ ಸಂಖ್ಯೆ ಎಷ್ಟು; ತರಬೇತಿ ಪಡೆದ ವಿದ್ಯಾರ್ಥಿಗಳಿಗೆ ಉದ್ಯೋಗ ಪಡೆಯಲು ಸರ್ಕಾರದ ಮುಂದಿರುವ ಯೋಜನೆಗಳು ಯಾವುವು; (ವಿವರ ನೀಡುವುದು) | **ಕೌಶಲ್ಯ ಮಿಷನ್:**<br>ಕಲಬುರಗಿ ಜಿಲ್ಲೆಯಲ್ಲಿ ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆಯಡಿ 5969 ಅಭ್ಯರ್ಥಿಗಳು ಹಾಗೂ ಯಾದಗಿರಿ ಜಿಲ್ಲಯಲ್ಲಿ 1879 ಅಭ್ಯರ್ಥಿಗಳು ತರಬೇತಿ ಪಡೆದಿರುತ್ತಾರೆ, ಅದರಂತೆ ಪ್ರಧಾನಮಂತ್ರಿಗಳ ಕೌಶಲ್ಯ ವಿಕಾಸ ಯೋಜನೆಯಡಿ ಕಲಬುರಗಿ ಜಿಲ್ಲೆಯಲ್ಲಿ 1615 ಅಭ್ಯರ್ಥಿಗಳು ಹಾಗೂ ಯಾದಗಿರಿ ಜಿಲ್ಲೆಯಲ್ಲಿ 300 ಅಭ್ಯರ್ಥಿಗಳಿಗೆ ಉಚಿತ ಕೌಶಲ್ಯಾಧಾರಿತ ತರಬೇತಿಯನ್ನು ನೀಡಲಾಗಿರುತ್ತದೆ. ಸದರಿ ಯೋಜನೆಯಡಿ ತರಬೇತಿ ಪಡೆದ ಅಭ್ಯರ್ಥಿಗಳ ಪೈಕಿ ಶೇ 70 ರಷ್ಟು ಅಭ್ಯರ್ಥಿಗಳಿಗೆ ಉದ್ಯೋಗಾವಕಾಶ ಒದಗಿಸುವ ಷರತ್ತಿನೊಂದಿಗೆ ತರಬೇತಿ ಕೇಂದ್ರಗಳಿಗೆ ತರಬೇತಿ ನೀಡಲು ಅವಕಾಶ ಕಲ್ಪಿಸಲಾಗಿದೆ.<br><br>**ಡೇ-ನಲ್ಮ್:**<br>ಡೇ-ನಲ್ಮ್ ಅಭಿಯಾನದಡಿ ಕಳೆದ 3 ವರ್ಷಗಳಲ್ಲಿ ತರಬೇತಿಯನ್ನು ಪಡೆದ ಅಭ್ಯರ್ಥಿಗಳ ವಿವರ ಈ ಕೆಳಕಂಡಂತಿರುತ್ತದೆ.<br><br>ಕ್ರ. ಸಂ / ವರ್ಷ / ಜಿಲ್ಲೆಯ ಹೆಸರು: ಕಲಬುರಗಿ, ಯಾದಗಿರಿ<br>1 / 2017-18 / 2808 / 849<br>2 / 2018-19 / 1298 / 269<br>3 / 2019-20 / 827 / 182<br><br>ತರಬೇತಿಯನ್ನು ಪಡೆದ ವಿದ್ಯಾರ್ಥಿಗಳಿಗೆ ಉದ್ಯೋಗವನ್ನು ಪಡೆಯಲು ಈ ಕೆಳಕಂಡಂತೆ ಅವಕಾಶವಿರುತ್ತದೆ.<br>• ಕೌಶಲ್ಯ ತರಬೇತಿ ಮೂಲಕ ಉದ್ಯೋಗ ಮತ್ತು ಸ್ಥಳ ನಿಯುಕ್ತಿ ಉಪಘಟಕದ ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ತರಬೇತಿಯನ್ನು ಪಡೆದುಕೊಂಡ ಶೇ. 70 ರಷ್ಟು ಅಭ್ಯರ್ಥಿಗಳಿಗೆ ಸ್ವಯಂ ಉದ್ಯೋಗ ಅಥವಾ ವೇತನಾಧಾರಿತ ಉದ್ಯೋಗವನ್ನು ಕಲ್ಪಿಸಲು ಅವಕಾಶವಿರುತ್ತದೆ. |

- ತರಬೇತಿಯನ್ನು ಪಡೆದ ವಿದ್ಯಾರ್ಥಿಗಳು ಸ್ವಯಂ ಉದ್ಯೋಗವನ್ನು ಪ್ರಾರಂಭಿಸಲು ಇಚ್ಛಿಸಿದಲ್ಲಿ, ವೈಯಕ್ತಿಕ ಕಿರು ಉದ್ದಿಮೆಗೆ ರೂ.2.00 ಲಕ್ಷ ಗುಂಪು ಕಿರು ಉದ್ದಿಮೆಗೆ ರೂ.10.00 ಲಕ್ಷದ ವರೆಗೆ ಬ್ಯಾಂಕಿನಿಂದ ಸಾಲ ಸೌಲಭ್ಯವನ್ನು ಕಲ್ಪಿಸಿ, ಶೇ.7 ಕ್ಕಿಂತ ಮೇಲ್ಪಟ್ಟ ಬಡ್ಡಿ ಸಹಾಯಧನವನ್ನು ಯೋಜನೆಯಿಂದ ಭರಿಸಿ ಪಾವತಿಸಲಾಗುವುದು.

**ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ (NRLM):**

ಡಿಡಿಯುಜಿಕೆವೈ ಮತ್ತು ಆರ್‌ಸೆಟಿ ಯೋಜನೆಯಡಿಯಲ್ಲಿ ತರಬೇತಿ ಪಡೆದ ಫಲಾನುಭವಿಗಳ ವಿವರ ಈ ಕೆಳಕಂಡಂತಿದೆ:-

| ಕ್ರಸಂ | ಜಿಲ್ಲೆ | ಡಿಡಿಯುಜಿಕೆವೈ | ಆರ್‌ಸೆಟಿ | DDUGKY |
|---|---|---|---|---|
| 1 | ಕಲಬುರಗಿ | 6121 | 3410 | 3096 |
| 2 | ಯಾದಗಿರಿ | 345 | 3618 | 289 |

RSETI ಯೋಜನೆಯಡಿ ತರಬೇತಿ ನೀಡಿ ಬ್ಯಾಂಕ್‌ನಿಂದ ಸಾಲ ಪಡೆಯಲು ಸಹಾಯ ನೀಲಾಗುತ್ತಿದೆ.

(ಇ) ಕೌಶಲ್ಯಾಭಿವೃದ್ಧಿಯಲ್ಲಿ ತರಬೇತಿ ಪಡೆದು ಅಭ್ಯರ್ಥಿಗಳಿಗೆ ಗುಡಿ ಕೈಗಾರಿಕೆಗಳನ್ನು ನಿರ್ಮಿಸಲು ಸರ್ಕಾರ ಯಾವ ರೀತಿ ಸಹಾಯ ಮಾಡುತ್ತದೆ? (ವಿವರ ನೀಡುವುದು)

**ಡೇ-ನಲ್ಮ್:**

ತರಬೇತಿ ಪಡೆದು ಅಭ್ಯರ್ಥಿಗಳು ಗುಡಿ ಕೈಗಾರಿಕೆಯನ್ನು ನಿರ್ಮಿಸಲು ಆಸಕ್ತಿಯನ್ನು ತೋರಿದಲ್ಲಿ,

ಡೇ-ನಲ್ಮ್ ಅಭಿಯಾನದ ಸ್ವಯಂ ಉದ್ಯೋಗ ಕಾರ್ಯಕ್ರಮ ಉಪಘಟಕದಡಿ ವೈಯಕ್ತಿಕ ಮತ್ತು ಗುಂಪು ಕಿರುಉದ್ದಿಮೆಯನ್ನು ಪ್ರಾರಂಭಿಸಲು ಕ್ರಮವಾಗಿ ರೂ.2.00 ಲಕ್ಷ ಹಾಗೂ ರೂ.10.00 ಲಕ್ಷದವರೆಗೆ ಬ್ಯಾಂಕಿನಿಂದ ಸಾಲವನ್ನು ಒದಗಿಸಿ, ಶೇ.7ಕ್ಕಿಂತ ಮೇಲ್ಪಟ್ಟ ಬಡ್ಡಿ ಸಹಾಯಧನವನ್ನು ಯೋಜನೆಯಿಂದ ಭರಿಸಿ ಪಾವತಿಸಲಾಗುವುದು.

**ಸಿಡಾಕ್:**

ಕೌಶಲ್ಯಾಭಿವೃದ್ಧಿ ತರಬೇತಿ ಪಡೆದ ಅಭ್ಯರ್ಥಿಗಳಿಗೆ ಗುಡಿ ಕೈಗಾರಿಕೆಗಳನ್ನು ನಿರ್ಮಿಸಲು ಕರ್ನಾಟಕ ಉದ್ಯಮಶೀಲತಾಭಿವೃದ್ಧಿ ಕೇಂದ್ರ (ಸಿಡಾಕ್)ವು ಉದ್ಯಮಶೀಲತಾಭಿವೃದ್ಧಿ ತರಬೇತಿ ಹಾಗೂ ಬೆಂಬಲ ಸೇವೆ ನೀಡುವುದರ ಮೂಲಕ ಸಹಾಯ ಮಾಡುತ್ತದೆ.

**ಸಂಖ್ಯೆ: ಕೌಉಜೀಇ 16 ಉಜೀಪ್ರ 2021**

**(ಡಾ|| ಸಿ.ಎನ್. ಅಶ್ವಥ್‌ನಾರಾಯಣ)**
**ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ,**
**ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ**
**ಮತ್ತು ಜೀವನೋಪಾಯ ಸಚಿವರು.**